# ಸಂವಹನದ ಸೃಷ್ಟಿ

**ಮುಕೇಶ್ ಮಾಳವೀಯ**

ಈಗ ನಾವೆಲ್ಲ ದೊಡ್ಡವರಾಗಿದ್ದರೂ ಹೆಚ್ಚು ಕಡಿಮೆ ನಾವೆಲ್ಲರೂ ಬಾಲ್ಯವನ್ನು ಅನುಭವಿಸಿದ ಅಥವಾ ಮಕ್ಕಳೊಂದಿಗೆ ಕಾಲ ಕಳೆದ ಅನುಭವಗಳನ್ನಂತೂ ಹೊಂದಿರುತ್ತೇವೆ. ಶಿಶುಗಳು ತಮ್ಮ ಸುತ್ತಮುತ್ತಲಿನ ಜೀವಿಗಳ ಭಾವನಾತ್ಮಕ ಪ್ರಚೋದನೆಗಳನ್ನು ಗುರುತಿಸಿ, ಅದೇ ರೀತಿಯಲ್ಲಿ ಭಾವನಾತ್ಮಕವಾಗಿ ಪ್ರತಿಕ್ರಿಯಿಸುವುದು ಕೂಡ ನಮ್ಮ ಅನುಭವಕ್ಕೆ ಬಂದಿರುತ್ತದೆ. ಸಂತೋಷ, ಭೀತಿ, ಪ್ರೀತಿ, ಉತ್ಸಾಹ, ಶಾಂತಿಯಂಥ ಭಾವಗಳಿಗೆ ಮಕ್ಕಳ ಅಭಿವ್ಯಕ್ತಿ ಹಾಗೂ ಪ್ರತಿಕ್ರಿಯೆಗಳನ್ನು ನಾವು ಕೂಡ ಅನುಭವಿಸಿದ್ದೇವೆ. ತಮ್ಮ ಅಭಿವ್ಯಕ್ತಿಯನ್ನು ಭಾಷೆಯ ಮೂಲಕ ವ್ಯಕ್ತಪಡಿಸುವುದನ್ನು ಕಲಿಯುವುದಕ್ಕೆ ಮುನ್ನ, ಮಕ್ಕಳು ತಮ್ಮ ಎಲ್ಲ ಸಂವಹನಗಳನ್ನೂ ಅಭಿವ್ಯಕ್ತಿಯ ಮೂಲಕವೇ ಮಾಡುತ್ತಿರುತ್ತಾರೆ. ಅವರು ಸ್ವಲ್ಪ ದೊಡ್ಡವರಾದ ಮೇಲೆ ಭಾಷೆಯ ಬಳಕೆಯನ್ನು ಕಲಿತುಕೊಂಡಾಗ ತಮ್ಮ ಭಾವನೆಗಳನ್ನು ಕೇವಲ ಮೌಖಿಕ ಉಚ್ಚಾರಣೆಯ ಮೂಲಕ ವ್ಯಕ್ತಪಡಿಸಲು ಹಾಗೂ ಭಾವನಾತ್ಮಕ ಪದಗಳನ್ನು ಕೇಳುತ್ತಾ ನೆಮ್ಮದಿಯಾಗಿರಲು ಕಷ್ಟವಾಗುತ್ತದೆ. ಮಕ್ಕಳು ತಮ್ಮ ವಿಚಾರಗಳನ್ನು ವ್ಯಕ್ತಪಡಿಸಲು ಮೌಖಿಕ ಭಾಷೆಯ ಜೊತೆಗೆ ಕೂಗುವುದು, ಅಳುವುದು, ಕೋಪಗೊಳ್ಳುವುದು ಮುಂತಾದವುಗಳನ್ನು ಮಾಡುತ್ತವೆ. ಕಿರುಚುವ, ನಗುವ, ಬಿಕ್ಕಿ ಬಿಕ್ಕಿ ಅಳುವ, ಮುದ್ದು ಮಾಡುವ, ನಾಚಿಕೊಳ್ಳುವ, ಮಡಿಲಲ್ಲಿ ಕುಳಿತುಕೊಳ್ಳುವ, ಹೆಗಲಿಗೆ ಕೈಹಾಕುವ, ಕೈ ಹಿಡಿದುಕೊಳ್ಳುವ ಮುಂತಾದ ಕ್ರಿಯೆಗಳ ಮೂಲಕ ತಮ್ಮ ಸಹಚರರ ಜೊತೆಗೆ ಸಹಜವಾಗಿಯೇ ಅಭಿವ್ಯಕ್ತಿಸುತ್ತಾರೆ ಹಾಗೂ ಹೆಚ್ಚಿನ ಶಾರೀರಿಕ ಅಭಿವ್ಯಕ್ತಿಯನ್ನುಹೊಂದಿರುವ ಭಾಷೆಯ ಮೂಲಕ ತಮ್ಮ ಒಡನಾಡಿಗಳ ಜೊತೆಗೆ ಸಂಪರ್ಕ ಸಾಧಿಸುತ್ತಾರೆ.

ಬಹಳ ನಿಖರವಾದ ಸಂವಹನವು ಅಮೌಖಿಕ ಸೂಚನೆಗಳು ಮತ್ತು ಅಂಗಸನ್ನೆಗಳನ್ನು ಅವಲಂಬಿಸಿರುತ್ತದೆ. ಸಂವಹನವನ್ನು ಸಮರ್ಥವಾಗಿ ಮುನ್ನಡೆಸಲು, ಮಗುವು ಇನ್ನೊಬ್ಬರು ಕಳುಹಿಸಿದ ಸಂಪೂರ್ಣ ಸಂದೇಶವನ್ನು ಪ್ರಕ್ರಿಯೆಗೊಳಿಸಲು ಹಾಗೂ ಮೌಖಿಕ ಮತ್ತು ಅಮೌಖಿಕ ಅಂಶಗಳನ್ನು ಸಂಯೋಜಿಸಲು ಸಮರ್ಥವಾಗಿರಬೇಕಾಗುತ್ತದೆ.

**ಭಾವನೆಯ ಸಂವಹನಕ್ಕಾಗಿ ಸಹವಾಸ ಮತ್ತು ಸ್ವಾತಂತ್ರ್ಯ**

ವ್ಯಕ್ತಿಗಳಲ್ಲಿ ಭಾಷಾ ಕೌಶಲ್ಯಗಳು ನಡುವಿನ ಒಡನಾಟದಿಂದ ಬಂದಿರಬಹುದು. ಮನುಷ್ಯನು ಭಾಷೆಯನ್ನು ಬಳಸಲು ಕಲಿಯುವ ಮೊದಲೇ ಪ್ರಾಯಶಃ ಮಾನವನ ಭಾವನೆಗಳು ಇಂದ್ರಿಯಗಳ ಜತೆಗೂಡುವಿಕೆಯಿಂದ ಬೆಳೆದಿರಬಹುದು.

ಮಕ್ಕಳ ಕಲಿಕೆಯ ಪ್ರತಿಯೊಂದು ಆರಂಭವೂ ಅವರ ಕ್ರಿಯೆ ಮತ್ತು ಆಲೋಚನಾ ಸ್ವಾತಂತ್ರ್ಯದ ಮೇಲೆ ಅವಲಂಬಿತವಾಗಿದೆ. ತುಂಬ ಇತ್ತೀಚಿನವರೆಗೂ ಬಾಲ್ಯದಲ್ಲಿ ಈ ಕಲಿಕೆಯ ಸ್ವಾತಂತ್ರ್ಯದ ಅವಕಾಶಗಳು ಹೆಚ್ಚಾಗಿ ಗೋಚರಿಸುತ್ತಿದ್ದವು. ಮಕ್ಕಳಿಗೆ ಮಣ್ಣಿನ ಪರಿಚಯವಿತ್ತು. ಒದ್ದೆ ಜೇಡಿಮಣ್ಣಿನ ಮುದ್ದೆಯನ್ನು ಕೈಯಲ್ಲಿ ತೆಗೆದುಕೊಂಡು, ಅದರಲ್ಲಿ ಯಾವುದಾದರೂ ಆಟಿಕೆ ಅಥವಾ ಪ್ರತಿಮೆಗಳಂಥ ಯಾವುದಾದರೂ ಆಕೃತಿಯನ್ನು ರಚಿಸುವ ಕಲೆಯು ಮಕ್ಕಳಿಗೆ ಸಿದ್ಧಿಸಿರುತ್ತಿತ್ತು. ಹಳೆಯ ಸೈಕಲ್ ಟೈರು ಉರುಳಿಸುತ್ತಾ ಆಡುವುದರಿಂದ ಹಿಡಿದು ಸೈಕಲ್ ಕಲಿಯುವವರೆಗೆ ಮಕ್ಕಳು ಪುಳಕಿತರಾಗುತ್ತಿದ್ದರು. ಬಾಲ್ಯದಲ್ಲಿ ಮರ ಹತ್ತುವುದಂತೂ  ಅನಿವಾರ್ಯವೇ ಆಗಿರುತ್ತಿತ್ತು. ಹಿರಿಯರು ಎಷ್ಟು ಸೀರಿಯಸ್ ಆಗಿ ಆಡುತ್ತಿದ್ದ ಮನೆಆಟ (ಘರ್‌ಘುಲಾ) ಎಂಬ ಬಾಲ್ಯದ ಆಟದಲ್ಲಿ ನಟನೆ ಎಷ್ಟು ಚೆನ್ನಾಗಿರುತ್ತಿದ್ದೆಂದರೆ, ಯಾರಾದರೂ ಹಿರಿಯರು ಅದನ್ನು ಕದ್ದು ನೋಡಿದ್ದರೆ ಅವರು ಕೂಡ ತಮ್ಮ ಹಿರಿತನವನ್ನು ಒಂದಿಷ್ಟು ತಿದ್ದಿಕೊಳ್ಳುತ್ತಿದ್ದರು. ಲಾಲಿ ಹಾಡುಗಳು, ಸಂಸ್ಕಾರ ಗೀತೆಗಳು ಮತ್ತು ಜಾನಪದ ಕಥೆಗಳ ಪರಿಚಯ ಸುಲಭವಾಗಿ ಆಗಿಹೋಗಿರುತ್ತಿತ್ತು. ಇಂಥ ಬಾಲ್ಯವು ಮಕ್ಕಳಿಗೆ ಒಂದಿಷ್ಟು ಕಲಾತ್ಮಕ, ಸೃಜನಶೀಲ ಮತ್ತು ಕಲ್ಪನಾಶೀಲರಾಗಿರಲು ಸಹಾಯ ಮಾಡುತ್ತಿತ್ತು ಎಂಬುದೇ ಈ ವಿಚಾರದಲ್ಲಿನ ತೀರ್ಮಾನವಾಗಿದೆ. ಈ ಬಾಲ್ಯದಲ್ಲಿ, ಸಂವೇದನೆಗಳು, ಭಾವನೆಗಳು ಮತ್ತು ಭಾಷೆಯ ಬೆಳವಣಿಗೆಗೆ ಪೂರಕವಾದ ವಾತಾವರಣವು ಲಭ್ಯವಿರುತ್ತಿತ್ತು.

ಇದೇ ಮಕ್ಕಳು ಶಾಲೆಗೆ ಹೋಗಲು ಶುರು ಮಾಡಿದಾಗ ಶಾಲೆಯು ಈ ಮಕ್ಕಳ ಸ್ವತಂತ್ರ ಹಾಗೂ ಕಲಿಕೆಯ ಸ್ವಂತಿಕೆಗೆ ಅವಕಾಶ ನೀಡುವುದಿಲ್ಲ. ಮಕ್ಕಳು ಅನುಕರಣೆ ಮೂಲಕ ಕಲಿಯುವುದರಿಂದ ಶಾಲೆಯವರು ಅನುಕರಣೆ ಮಾಡಲು ಒತ್ತಾಯಿಸುತ್ತಾರೆ. ಯಾವಾಗ ನಿಲ್ಲಬೇಕು, ಹೇಗೆ ಕುಳಿತುಕೊಳ್ಳಬೇಕು, ಬಾಲಕರು ಹಾಗೂ ಬಾಲಕಿಯರು ಪ್ರತ್ಯೇಕವಾಗಿ ಕುಳಿತುಕೊಳ್ಳಬೇಕು, ಗಂಟೆಯ ಸದ್ದಿನಿಂದ ಸಂಚಾಲಿತರಾಗುವುದು, ಏನು ಹೇಳಿಕೊಡಲಾಗಿದೆಯೋ ಅದನ್ನೇ ಹೇಳಬೇಕು, ಏನು ಬರೆಯಲಾಗಿದೆಯೋ ಅದನ್ನೇ ಓದಬೇಕು, ಏನನ್ನು ಓದಿಸಲಾಗಿದೆಯೋ ಅದನ್ನೇ ಬರೆಯಬೇಕು ಮುಂತಾದ ಶಾಲೆಯ ನಿಯಮಗಳನ್ನು ಅನುಸರಿಸಲೇಬೇಕು. ಇಲ್ಲಿ ಎಲ್ಲರೂ ಒಂದೇ ರೀತಿ ಕಲಿಯಬೇಕೆನ್ನುವುದು ಎಂಥ ದುರಾಗ್ರಹ ಆಗಿರುತ್ತಿದ್ದೆಂದರೆ, ಒಂದು ವೇಳೆ ಯಾವುದೇ ಮಗು ತನ್ನ ಚಿತ್ತೈಕಾಗ್ರತೆಯ ಪ್ರಯತ್ನದಲ್ಲಿ ಸ್ವಲ್ಪವೇ ತಡವಡಿರಿಸಿದರೂ ಆ ಮಗುವಿಗೆ ದಡ್ಡ ಎಂದು ಹಣೆಪಟ್ಟಿ ಕಟ್ಟಿ ಆತನನ್ನು ಹಿಂದಕ್ಕೆ ಬಿಟ್ಟು ಪ್ರತಿಯೊಬ್ಬರೂ ಮುಂದೆ ಸಾಗುತ್ತಿರುತ್ತಾರೆ. ಯೋಚಿಸಿ, ಅರ್ಥಮಾಡಿಕೊಳ್ಳಲು ಮತ್ತು ಬಳಿಕ ತಮ್ಮದೇ ಆದ ರೀತಿಯಲ್ಲಿ ಮುನ್ನಡೆಯಲು ಶಾಲೆಗಳಲ್ಲಿ ಅವಕಾಶಗಳಿರುವುದಿಲ್ಲ. ಪ್ರಾಯಶಃ ಸಾಮಾನ್ಯವಾಗಿ ಬಾಲ್ಯವನ್ನು ಅರ್ಥಮಾಡಿಕೊಳ್ಳಬಲ್ಲ ಯಾವುದೇ ತರಬೇತಿಯನ್ನು ಶಾಲೆಯು ಹೊಂದಿರುವುದಿಲ್ಲ. ವಿಷಯಗಳ ವಸ್ತು ವಿಷಯ ಎಷ್ಟೊಂದು ಶುಧ್ಧ ಹಾಗೂ ಅಪರಿಚಿತ ಪದಗಳಿಂದ ಬರೆಯಲ್ಪಟ್ಟಿರುವುದೆಂದರೆ, ಅದು ಮಕ್ಕಳೊಂದಿಗೆ ಅರ್ಥಪೂರ್ಣ ಸಂವಾದವನ್ನು  ಸೃಷ್ಟಿಸಲಾರದೆಯೇ ಶಾಲಾ ಸಮಯವು ಕಳೆದುಹೋಗುತ್ತದೆ. ಒಂದು ವೇಳೆ ವಸ್ತು ವಿಷಯವು ಅರ್ಥಪೂರ್ಣವಾಗಿದ್ದರೂ ಕೂಡ, ಅದನ್ನು ಕಲಿಸುವ ಶಿಕ್ಷಕರಲ್ಲಿ ಆ ವಸ್ತು ವಿಷಯವನ್ನು ಮಕ್ಕಳಲ್ಲಿ ರೋಚಕತೆ ಇಲ್ಲವೇ ರೋಮಾಂಚನವನ್ನು ಹಾಗೂ ಅಂಥ ಭಾವನೆಯ ಅನುಭೂತಿಯನ್ನು ಅನುಭವಿಸುವಂತೆ ಮಾಡುವ ಕೌಶಲ್ಯದ ಕೊರತೆ ಕಂಡುಬರುತ್ತದೆ. ಮಕ್ಕಳು ತಮ್ಮ ಕಲ್ಪನೆಗಳು ಹಾಗೂ ತಮ್ಮ ವಿವೇಚನೆಯನ್ನು ಬಳಸಿಕೊಂಡು ವಸ್ತು ವಿಷಯದೊಂದಿಗೆ ತೊಡಗಿಸಿಕೊಳ್ಳಲು ಸಾಧ್ಯವಾಗುವಂಥ ಅವಕಾಶವನ್ನು ಸೃಷ್ಟಿಸಲು ಶಿಕ್ಷಕರಿಗೆ ಅಪರೂಪವಾಗಿ ಮಾತ್ರ ಸಾಧ್ಯವಾಗುತ್ತದೆ. ಮಗುವಿನ ಮೂಲ ಚಿಂತನೆಗಾಗಿ ಶಾಲೆಯಲ್ಲಿ ಯಾವುದೇ ಪೂರಕ ಪರಿಸ್ಥಿತಿಯಾಗಲಿ ಮತ್ತು ಸಂವಾದವಾಗಲಿ ಇರುವುದಿಲ್ಲ. ಒಂದು ವೇಳೆ ಶಿಕ್ಷಕರು ವಿಷಯದ ಲಿಖಿತ ಭಾಷೆಯನ್ನು ರಚನಾತ್ಮಕ ರೀತಿಯಲ್ಲಿ ಬಳಸಿಕೊಂಡರೆ, ಮಕ್ಕಳು ಬೆಳೆದಂತೆಲ್ಲಾ ಕಳೆದುಹೋಗುವ ಆ ಕೋಮಲ ಭಾವನೆಗಳು ಮತ್ತು ಸಂವೇದನೆಗಳನ್ನು ಉಳಿಸಿಕೊಳ್ಳಬಹುದು. ಭಾವನಾತ್ಮಕ ಭಾಷಾ ಶಬ್ದಗಳನ್ನು ಪರಿಚಯಿಸಲು ಇಲ್ಲವೇ ಬಳಸುವುದನ್ನು ಕಲಿಸಲು ಶಾಲಾ ಪಠ್ಯಕ್ರಮದಲ್ಲಿ ಸರಿಯಾಗಿ ವ್ಯಾಖ್ಯಾನವನ್ನೇ ಮಾಡಲಾಗಿಲ್ಲ.

ಅನೇಕ ಮಕ್ಕಳಿಗೆ ಶಾಲೆಯು ಸಕಾರಾತ್ಮಕ ಸಾಮಾಜಿಕ ಅನುಭವ ಆಗಿರಬಹುದಾದರೂ, ಶಾಲೆಯು ಮಕ್ಕಳು ಕೇವಲ ಓದಲು, ಬರೆಯಲು ಮತ್ತು ಗಣಿತವನ್ನು ಕಲಿಯುವ  ಒಂದು ಸ್ಥಳ ಮಾತ್ರವಲ್ಲ. ಅದು ಅವರು ಇತರರೊಂದಿಗೆ ಬೆರೆಯಲು ಹಾಗೂ ಸಾಮಾಜಿಕ ಕೌಶಲ್ಯಗಳನ್ನು ಬೆಳೆಸಿಕೊಳ್ಳುವುದನ್ನು ಕಲಿಯುವ ಸ್ಥಳವೂ ಆಗಿದೆ. ಸಾಮಾಜಿಕ ಕೌಶಲ್ಯಗಳು ನಮ್ಮ ಸಾಂಸ್ಕೃತಿಕ ಪರಿಸರದಲ್ಲಿ ಅನುಕೂಲಕರವಾಗಿ ಸಂವಹನ ನಡೆಸಲು ಪೂರಕವಾಗಿರುವ ಕೌಶಲ್ಯಗಳೂ ಆಗಿರುತ್ತವೆ.

ಮಗುವಿನ ಭಾವನಾತ್ಮಕ ಆರೋಗ್ಯ ಮತ್ತು ಯೋಗಕ್ಷೇಮದಲ್ಲಿ ಸಾಮಾಜಿಕ ಕೌಶಲ್ಯಗಳು ಬಹಳ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತವೆ. ಮಕ್ಕಳು ಇತರೆ ಜನ್ಮಜಾತವಾದ ಸಾಮರ್ಥ್ಯ ಮತ್ತು ದೌರ್ಬಲ್ಯಗಳಾದ ಧ್ಯಾನ, ಸ್ಮರಣೆ, ಭಾಷೆ ಮತ್ತು ಚಾಲಕ ಕೌಶಲ್ಯಗಳೊಂದಿಗೆ ಜನಿಸುವಂತೆಯೇ ಜನ್ಮಜಾತವಾದ ಸಾಮಾಜಿಕ ಸಾಮರ್ಥ್ಯಗಳೊಂದಿಗೆ ಕೂಡ ಜನಿಸಿರುತ್ತಾರೆ. Social Skills And School    By Candy Lawson.

**ನಮ್ಮ ಜೀವನದಲ್ಲಿ ಭಾವನೆಗಳ ಪಾತ್ರವೇನು?**

ನಮ್ಮ ಭಾವನಾತ್ಮಕ ಪ್ರತಿಕ್ರಿಯೆಗಳ ಕಾರ್ಯ ಮತ್ತು ಉದ್ದೇಶದಲ್ಲಿ ಭಾವನೆಯ ಮೂರು ಪ್ರಮುಖ ಅಂಶಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ.

ವ್ಯಕ್ತಿಮನೋಗತ ಅಂಶ (ನೀವು ಭಾವನೆಯನ್ನು ಹೇಗೆ ಅನುಭವಿಸುತ್ತೀರಿ)

ಶಾರೀರಿಕ ಅಂಶ (ನಿಮ್ಮ ದೇಹವು ಭಾವನೆಗಳಿಗೆ ಹೇಗೆ ಪ್ರತಿಕ್ರಿಯಿಸುತ್ತಿದೆ)

ಅಭಿವ್ಯಕ್ತಿಶೀಲ ಅಂಶ (ಭಾವನೆಗೆ ಪ್ರತಿಕ್ರಿಯೆಯಾಗಿ ನೀವು ಹೇಗೆ ವರ್ತಿಸುತ್ತೀರಿ).

ಭಾವನೆಗಳು ಏನು ಮಾಡುತ್ತವೆ?

**ಭಾವನೆಗಳು ನಮ್ಮನ್ನು ಕ್ರಮ ಕೈಗೊಳ್ಳಲು ಪ್ರೇರೇಪಿಸಬಹುದು.**

ನಾವು ಪರೀಕ್ಷೆಯನ್ನು ಬರೆಯುವ ಸಂದರ್ಭ ಎದುರಾದಾಗ, ನಮ್ಮ ನಿರ್ವಹಣೆ ಉತ್ತಮವಾಗಿರಬಹುದೇ ಹಾಗೂ ಪರೀಕ್ಷೆಯು ನಮ್ಮ ಅಂತಿಮ ಶ್ರೇಣಿಗಳ ಮೇಲೆ ಹೇಗೆ ಪರಿಣಾಮ ಬೀರಬಹುದು ಎಂಬುದರ ಬಗ್ಗೆ ನಾವು ಸಾಕಷ್ಟು ಆತಂಕವನ್ನು ಅನುಭವಿಸಬಹುದು. ಈ ಭಾವನಾತ್ಮಕ ಪ್ರತಿಕ್ರಿಯೆಗಳ ಕಾರಣದಿಂದಲೇ ನಾವು ಅಧ್ಯಯನ ಮಾಡುವ ಸಾಧ್ಯತೆ ಹೆಚ್ಚಾಗಿರುತ್ತದೆ. ನಾವು ನಿರ್ದಿಷ್ಟ ಭಾವನೆಯನ್ನು ಅನುಭವಿಸಿದ ಕಾರಣದಿಂದಾಗಿಯೇ, ಉತ್ತಮ ಶ್ರೇಣಿಯನ್ನು ಸಂಪಾದನೆ ಮಾಡುವ ನಮ್ಮ ಅವಕಾಶಗಳನ್ನು ವೃದ್ಧಿಸುವ ನಿಟ್ಟಿನಲ್ಲಿ ನಾವು ಕ್ರಮ ತೆಗೆದುಕೊಳ್ಳಲು ಮತ್ತು ಧನಾತ್ಮಕವಾಗಿ ಏನನ್ನಾದರೂ ಮಾಡಲು ಪ್ರೇರೇಪಣೆಗೊಂಡಿರುತ್ತೇವೆ.

ಸಕಾರಾತ್ಮಕ ಭಾವನೆಗಳನ್ನು ಅನುಭವಿಸುವಂತಾಗಲು ಹಾಗೂ ನಕಾರಾತ್ಮಕ ಭಾವನೆಗಳನ್ನು ಮೂಡಿಸುವ ಸಾಧ್ಯತೆಯನ್ನು ಕಡಿಮೆ ಮಾಡಲು ನಾವು ಕೆಲವು ನಿರ್ದಿಷ್ಟ ಕ್ರಮಗಳನ್ನು ತೆಗೆದುಕೊಳ್ಳುತ್ತೇವೆ. ಉದಾಹರಣೆಗೆ, ನಮಗೆ ಸಂತೋಷ, ತೃಪ್ತಿ ಮತ್ತು ಉತ್ಸಾಹವನ್ನು ತಂದುಕೊಡಬಲ್ಲ ಸಾಮಾಜಿಕ ಚಟುವಟಿಕೆಗಳು ಅಥವಾ ಹವ್ಯಾಸಗಳನ್ನು ನಾವು ಹುಡುಕಿಕೊಳ್ಳಬಹುದು. ಇನ್ನೊಂದೆಡೆ, ಪ್ರಾಯಶಃ ನಾವು ನಮ್ಮಲ್ಲಿ ಬೇಸರ, ದುಃಖ ಅಥವಾ ಆತಂಕಕ್ಕೆ ಕಾರಣವಾಗಬಹುದಾದ ಸನ್ನಿವೇಶಗಳನ್ನು ತಪ್ಪಿಸಬಹುದು.

**ಭಾವನೆಗಳು ನಾವು ಬದುಕಿರಲು ನೆರವಾಗುತ್ತದೆ, ಅಪಾಯಕ್ಕೆ ನೂಕುತ್ತದೆ ಹಾಗೂ ಆಪತ್ತಿನಿಂದ ಕಾಪಾಡುತ್ತದೆ**

ಭಾವನೆಗಳು, ಮನುಷ್ಯರು ಮತ್ತು ಪ್ರಾಣಿಗಳು ಬದುಕಲು ಮತ್ತು ಸಂತಾನೋತ್ಪತ್ತಿ ಮಾಡಲು ಅನುಮತಿಸುವ ಅನುಕೂಲತೆಯಾಗಿವೆ ಎಂದು ನಿಸರ್ಗವಾದಿ ಚಾರ್ಲ್ಸ್ ಡಾರ್ವಿನ್ ನಂಬಿದ್ದರು. ನಾವು ಕೋಪಗೊಂಡಾಗ, ನಾವು ನಮ್ಮ ಕಿರಿಕಿರಿಯ ಮೂಲವನ್ನು ಎದುರಿಸುವ ಸಾಧ್ಯತೆ ಇರುತ್ತದೆ. ನಾವು ಭಯವನ್ನು ಅನುಭವಿಸಿದಾಗ, ನಾವು ಆ ಅಪಾಯದಿಂದ ದೂರಹೋಗುವ ಸಾಧ್ಯತೆಯೇ ಹೆಚ್ಚಿರುತ್ತದೆ. ನಾವು ಪ್ರೀತಿಯ ಅನುಭವದಲ್ಲಿದ್ದಾಗ, ನಾವು ಒಬ್ಬ ಸಂಗಾತಿಗಾಗಿ ಹುಡುಕಬಹುದು ಹಾಗೂ ಮತ್ತೆ ಪುನಶ್ಚೇತನಗೊಳ್ಳಬಹುದು.

ಭಾವನೆಗಳು ನಮ್ಮ ಜೀವನದಲ್ಲಿ ಅನುಕೂಲಕರವಾದ ಪಾತ್ರವನ್ನು ನಿರ್ವಹಿಸುವುದಲ್ಲದೆ, ನಾವು ತ್ವರಿತವಾಗಿ ಕಾರ್ಯನಿರ್ವಹಿಸಲು ಹಾಗೂ ನಾವು ಜೀವಿತವಾಗಿರುವ ಮತ್ತು ಯಶಸ್ವಿಯಾಗುವ ಸಾಧ್ಯತೆಗಳನ್ನು ಹೆಚ್ಚಿಸುವ ಕ್ರಮಗಳನ್ನು ತೆಗೆದುಕೊಳ್ಳಲು ಪ್ರೇರೇಪಿಸುತ್ತವೆ.

**ನಾವು ನಿರ್ಧಾರಗಳನ್ನು ತೆಗೆದುಕೊಳ್ಳಲು ಭಾವನೆಗಳು ನಮಗೆ ಸಹಾಯ ಮಾಡಬಹುದು**

ನಾವು ತೆಗೆದುಕೊಳ್ಳುವ ನಿರ್ಧಾರಗಳ ಮೇಲೆ ನಮ್ಮ ಭಾವನೆಗಳು ಬಹಳ ದೊಡ್ಡ ಮಟ್ಟದಲ್ಲಿ ಪ್ರಭಾವ ಬೀರುತ್ತವೆ.

ಕೆಲವು ನಿರ್ದಿಷ್ಟ ವಿಧದಲ್ಲಿ ಮೆದುಳಿನ ಸಮಸ್ಯೆ ಹೊಂದಿದ್ದು, ಅದರಿಂದಾಗಿ ಭಾವನೆಗಳನ್ನು ಅನುಭವಿಸುವ ಸಾಮರ್ಥ್ಯದ ಮೇಲೆ ದುಷ್ಪ್ರಭಾವ ಉಂಟಾದ ಜನರಲ್ಲಿ, ಉತ್ತಮ ನಿರ್ಧಾರಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯವೂ ಕುಗ್ಗಿರುತ್ತದೆ ಎಂಬುದನ್ನು ಸಂಶೋಧಕರು ಕಂಡುಕೊಂಡಿದ್ದಾರೆ.

ನಮ್ಮ ನಿರ್ಧಾರಗಳು ಸಂಪೂರ್ಣವಾಗಿ ತರ್ಕ ಮತ್ತು ತರ್ಕಬದ್ಧತೆಯಿಂದ ರೂಪಿತವಾಗಿವೆ ಎಂದು ನಾವು ನಂಬುವ ಸಂದರ್ಭಗಳಲ್ಲೂ ಕೂಡ, ಭಾವನೆಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ಭಾವನಾತ್ಮಕ ಬುದ್ಧಿವಂತಿಕೆ ಇಲ್ಲವೇ ಭಾವನೆಗಳನ್ನು ಅರ್ಥೈಸಿಕೊಳ್ಳುವ ಮತ್ತು ನಿರ್ವಹಿಸುವ ನಮ್ಮ ಸಾಮರ್ಥ್ಯವು ನಿರ್ಧಾರ ತೆಗೆದುಕೊಳ್ಳುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ ಎಂದು ಸಾಬೀತುಪಡಿಸಲಾಗಿದೆ.

**ಇತರೆ ಜನರು ನಮ್ಮನ್ನು ಅರ್ಥಮಾಡಿಕೊಳ್ಳಲು ಭಾವನೆಗಳು ಅನುವು ಮಾಡಿಕೊಡುತ್ತದೆ**

ನಾವು ಇತರರೊಂದಿಗೆ ಮಾತುಕತೆ ನಡೆಸುವಾಗ, ನಾವು ಹೇಗೆ ಭಾವಿಸುತ್ತಿದ್ದೇವೆ ಎಂಬುದನ್ನು ಅರ್ಥಮಾಡಿಕೊಳ್ಳಲು ಅವರಿಗೆ ಸುಳಿವುಗಳನ್ನು ನೀಡುವುದು ಮುಖ್ಯವಾಗಿರುತ್ತದೆ. ಈ ಸೂಚನೆಗಳು ದೇಹ ಭಾಷೆಯ ಮೂಲಕ ಭಾವನಾತ್ಮಕ ಅಭಿವ್ಯಕ್ತಿಯನ್ನು ಒಳಗೊಂಡಿರಬಹುದು, ಉದಾಹರಣೆಗೆ, ನಾವು ಅನುಭವಿಸುತ್ತಿರುವ ನಿರ್ದಿಷ್ಟ ಭಾವನೆಗೆ ಸಂಬಂಧಿಸಿದ ವಿವಿಧ ಮುಖದ ಅಭಿವ್ಯಕ್ತಿಗಳು, ಇವು ವಿಶೇಷ ಭಾವನೆಗಳನ್ನು ಒಳಗೊಂಡಿರುತ್ತವೆ.

ಬೇರೆ ಸಂದರ್ಭಗಳಲ್ಲಿ, ನಾವು ಹೇಗೆ ಅನ್ನಿಸುತ್ತಿದೆ ಎಂಬುದನ್ನು ಅದು ಸರಳವಾಗಿ ತಿಳಿಸಬಹುದು. ನಾವು ನಮ್ಮ ಸ್ನೇಹಿತರು ಅಥವಾ ಕುಟುಂಬದ ಸದಸ್ಯರಿಗೆ 'ನಾವು ಸಂತೋಷ, ದುಃಖ, ಉತ್ಸಾಹ ಇಲ್ಲವೇ ಭೀತಿಯನ್ನು ಅನುಭವಿಸುತ್ತಿದ್ದೇವೆ' ಎಂದು ಹೇಳುವ ಮೂಲಕ ಅವರು ಮುಂದೆ ಕ್ರಮ ತೆಗೆದುಕೊಳ್ಳಲು ಪೂರಕವಾದ ಮಹತ್ವದ ಮಾಹಿತಿಯನ್ನು ನೀಡಿರುತ್ತೇವೆ.

ನಮ್ಮ ಭಾವನೆಗಳು ಅದು ಹೇಗೆ ಇತರರಿಗೆ ಅಮೂಲ್ಯವಾದ ಮಾಹಿತಿಯನ್ನು ಒದಗಿಸುತ್ತದೆಯೋ ಅದೇ ರೀತಿ, ನಮ್ಮ ಸುತ್ತಲಿನ ಭಾವನಾತ್ಮಕ ಅಭಿವ್ಯಕ್ತಿಗಳು ನಮಗೆ ಸಾಮಾಜಿಕ ಮಾಹಿತಿಯನ್ನು ಒದಗಿಸುತ್ತಿರುತ್ತವೆ. ಸಾಮಾಜಿಕ ಸಂವಹನವು ನಮ್ಮ ದೈನಂದಿನ ಜೀವನ ಮತ್ತು ಸಂಬಂಧಗಳ ಮಹತ್ವಪೂರ್ಣವಾದ ಭಾಗವಾಗಿದೆ ಹಾಗೂ ಬೇರೆಯವರ ಭಾವನೆಗಳನ್ನು ಅರ್ಥೈಸಲು ಮತ್ತು ಅದಕ್ಕೆ ಪ್ರತಿಕ್ರಿಯಿಸಲು ಸಾಧ್ಯವಾಗುವಂತಿರಬೇಕಿರುವುದು ಅತ್ಯವಶ್ಯವಾಗಿರುತ್ತದೆ. ಇದು ಸೂಕ್ತವಾಗಿ ಪ್ರತಿಕ್ರಿಯಿಸಲು ಮಾತ್ರವಲ್ಲ, ನಮ್ಮ ಸ್ನೇಹಿತರು, ಕುಟುಂಬದವರು ಮತ್ತು ಪ್ರೀತಿಪಾತ್ರರ ಜೊತೆಗೆ ಆಳವಾದ, ಹೆಚ್ಚು ಅರ್ಥಪೂರ್ಣವಾದ ಸಂಬಂಧಗಳನ್ನು ರೂಪಿಸಲು ನಮಗೆ ಅನುಮತಿಸುತ್ತದೆ. ಈ ಕಾಲದ ಹೆಚ್ಚಿನ ವಯಸ್ಕರು ಹೊಂದಿರುವ ಅತ್ಯಂತ ದರಿದ್ರತನ ಸೌಂದರ್ಯದ ಸಂವೇದನೆಗಳು ಮತ್ತು ನವಿರಾದ ಭಾವನೆಗಳನ್ನು ಇದು ನಮಗೆ ವಿವಿಧ ರೀತಿಯಲ್ಲಿ ನೀಡುತ್ತದೆ. ಜೊತೆಗೆ ಸಾಮಾಜಿಕ ಸಂದರ್ಭಗಳಲ್ಲಿ ಪರಿಣಾಮಕಾರಿಯಾಗಿ ಸಂವಹನ ನಡೆಸಲು ಅವಕಾಶ ನೀಡುತ್ತದೆ,

**ಭಾಷೆಯ ದೌರ್ಬಲ್ಯವು ಭಾವನೆಗಳ ಅಭಿವ್ಯಕ್ತಿಗೆ ಇರುವ ಅಡ್ಡಿ**

ಪದಗಳು ಅಥವಾ ಶಬ್ದಗಳಾಗಿ ರೂಪಾಂತರಗೊಂಡ ಸಂವೇದನೆಗಳು ಮತ್ತು ಭಾವನೆಗಳ ಮೌಖಿಕ ಶಾಬ್ದಿಕ ಪರಿಕಲ್ಪನೆಗಳನ್ನು ನಾವು ಬಹಳಷ್ಟು ಕಡಿಮೆ ಹೊಂದಿದ್ದೇವೆ. ಶ್ರೀಸಾಮಾನ್ಯ ಬಳಕೆ ಮಾಡುವ ಆಡು ಭಾಷೆಗೆ ಜೀವನದ ಅವಶ್ಯಕತೆಗಳು ಮತ್ತು ವ್ಯವಹಾರಗಳ ಶಬ್ದ ಭಂಡಾರ ಸಾಕಾಗಬಹುದು, ಆದರೆ ಭಾವನೆಗಳ ಶಬ್ದ ಭಂಡಾರದ ಕೊರತೆಯಿದೆ. ಸೂಕ್ಷ್ಮತೆಯನ್ನು ಗ್ರಹಿಸಲು ಮತ್ತು ಮೃದುತ್ವದ ಭಾವನೆಯ ಸಂವೇದನೆಯನ್ನು ಅನುಭವಿಸಲು ಒಬ್ಬ ವ್ಯಕ್ತಿಯ ಜೀವನದಲ್ಲಿ ಇರಲೇಬೇಕಾದ ಕಲೆ ಮತ್ತು ಸಾಹಿತ್ಯಿಕ  ಅನುಭವವು ಬಹುತೇಕ ಮಂದಿಗೆ ಲಭ್ಯವಿರುವುದಿಲ್ಲ. ಸಮಾಜದ ಈ ದರಿದ್ರತನ ಮಕ್ಕಳ ಮೇಲೂ ಪರಿಣಾಮ ಬೀರುತ್ತದೆ. ಭಾಷೆಯ ಈ ದೌರ್ಬಲ್ಯದಿಂದಾಗಿಯೇ, ವಯಸ್ಕರಲ್ಲಿ ಬಹುತೇಕ ಸಂವಹನವು ಭಾಷೆಯ ಮಾಧ್ಯಮದ ಮೂಲಕವೇ ನಡೆಯುವುದಲ್ಲದೆ, ಅವರ ಬೆಳವಣಿಗೆಯ ಜೊತೆಜೊತೆಗೆ ಅವರಲ್ಲಿನ ಸಂವೇದನೆಯೂ ಕೂಡ ನಾಶವಾಗುತ್ತ ಹೋಗುತ್ತದೆ ಎಂದು ನಾನು ಭಾವಿಸುತ್ತೇನೆ. ಲಿಖಿತ ಪದಗಳೊಂದಿಗೆ ಬಹುತೇಕ ಹಿರಿಯರ ಸಹವಾಸವು ಸ್ವಲ್ಪ ಹಾಗೂ ಕಡಿಮೆ ಕ್ರಿಯಾತ್ಮಕವಾಗಿರುತ್ತದೆ. ಅಲ್ಪ ಕಾಲಾವಧಿಗೆ ಲಿಖಿತ ಭಾಷೆಯನ್ನು ಬಲ್ಲವರು, ಶಾಲಾ ಹಂತದವರೆಗೆ ಮಾತ್ರ ಲಿಖಿತ  ಭಾಷೆಯ ಗುಂಗಲ್ಲಿ ಇರುತ್ತಾರೆ, ಶಾಲೆಯ ಈ ಲಿಖಿತ ಭಾಷೆಯನ್ನು, ಭಾವನೆಗಳ ಮತ್ತು ಸಂವೇದನೆಗಳ ಧ್ವನಿಯನ್ನು ಕೇಳಿಸುವಲ್ಲಿ ಅವರು ತುಂಬಾ ದುರ್ಬಲರಾಗಿರುತ್ತಾರೆ ಎನ್ನುವುದು ಸಾಬೀತಾಗಿದೆ. ಒಂದು ವೇಳೆ ಈ ಲಿಖಿತ ಭಾಷೆಯನ್ನು ಅಳವಡಿಸಿಕೊಂಡರೂ ಕೂಡ, ಮಕ್ಕಳು ಮತ್ತು ದೊಡ್ಡವರು ತಮ್ಮ ಯೋಚನೆಗಳು ಮತ್ತು ಭಾವನೆಗಳನ್ನು ಪದಗಳಲ್ಲಿ ವ್ಯಕ್ತಪಡಿಸುವಲ್ಲಿ ಕಷ್ಟ ಮತ್ತು

ಅಸಹಜತೆಯನ್ನು ಎದುರಿಸುತ್ತಾರೆ. ಲಿಖಿತ ಭಾಷೆಯಿಂದ ಪದಗಳ ಮೂಲಕ ಭಾವನೆಯ ಸಂವಹನವನ್ನು ಗ್ರಹಿಸಲು ಅಥವಾ ಅನುಭವಿಸಲು, ಪದಗಳನ್ನು ಹೆಚ್ಚು ಆಳವಾಗಿ ಪರಿಚಯಿಸಿಕೊಳ್ಳುವ ಅಥವಾ ಮಾಡುವ ಅವಶ್ಯಕತೆ ಇರುತ್ತದೆ. ಭಾವನಾತ್ಮಕ ಅಭಿವ್ಯಕ್ತಿಗಳನ್ನು ಹೊಂದಿರುವ ಸಾಹಿತ್ಯದ (ಕವನ, ಕಥೆ, ನಾಟಕ, ಹಾಡು, ಸಂಭಾಷಣೆ) ಲಭ್ಯತೆಯಿರುವ ಲಿಖಿತ ಭಾಷೆಯ ಗಾಢವಾದ ವಾತಾವರಣವನ್ನು ಮಕ್ಕಳಿಗೆ ಒದಗಿಸಬೇಕು. ಆದರೆ ಶಾಲೆಗಳು ಪದಗಳನ್ನು ಬರೆಯುವ ಮತ್ತು ಓದುವ ಯಾವ ತಂತ್ರವನ್ನು ಕಲಿಸುತ್ತದೆಯೆಂದರೆ, ಪದಗಳಿಂದ ರೂಪಿತವಾದ ವಾಕ್ಯಗಳನ್ನು ಅರ್ಥಮಾಡಿಕೊಳ್ಳುವುದೇ ಒಂದಿಷ್ಟು ಕಷ್ಟವಾಗುತ್ತದೆ. ಭಾಷಾ ಪಠ್ಯಪುಸ್ತಕವಿರುವ ಶಾಲಾ ಪಠ್ಯಪುಸ್ತಕದ ವಿಷಯದಿಂದ ನೆರವು ಸಿಗಬಹುದಾದರೂ, ಅದರಲ್ಲಿ ಹೆಚ್ಚಿನ ಪಾಠಗಳು (ಈಶ್ ವಿನಯ್ ಯಾ ಮಾತೃಭೂಮಿ ಕಾ ಆಹ್ವಾನ್ -ಈಶ್ ವಿನಯ್ ಅಥವಾ ಮಾತೃಭೂಮಿಯ ಕರೆ) ಮಕ್ಕಳ ಪ್ರಜ್ಞೆಯಲ್ಲಿ ಯಾವುದೇ ಸ್ಪಂದನೆಯನ್ನು ಉಂಟು ಮಾಡುವುದಿಲ್ಲ.

**ಸಾಹಿತ್ಯಿಕ ಕಥನಗಳನ್ನು ಓದುವುದರಿಂದ ಸಹಾನುಭೂತಿಯಲ್ಲಿ ಸುಧಾರಣೆ,**

ಒಳ್ಳೆಯ ಪುಸ್ತಕವನ್ನು ಓದುವುದರಿಂದ ನಿಮ್ಮ ಜೊತೆಗಿರುವ ಮನುಷ್ಯರೊಂದಿಗೆ ಉತ್ತಮ ಬಾಂಧವ್ಯ ಹೊಂದಲು ಸಹಾಯ ಮಾಡುತ್ತದೆ ಎಂದು ನಿಮಗೆ ಎಂದಾದರೂ ಅನ್ನಿಸಿದೆಯೇ? ಹಾಗಿದ್ದಲ್ಲಿ, ಹೊಸ ವೈಜ್ಞಾನಿಕ ಅಧ್ಯಯನದ ಫಲಿತಾಂಶವೂ ಕೂಡ ಅದನ್ನೇ ಹೇಳುತ್ತದೆ, ಆದರೆ ಅದು ಸಾಧ್ಯವಾಗುವುದು ನೀವು ಓದುವ ವಿಷಯವಸ್ತುವು ಸಾಹಿತ್ಯಿಕ ಕಥನವಾಗಿದ್ದಾಗ ಮಾತ್ರ –

ನ್ಯೂಯಾರ್ಕ್‌ನ ನ್ಯೂ ಸ್ಕೂಲ್ ಫಾರ್ ಸೋಶಿಯಲ್ ರಿಸರ್ಚ್‌ನ ಮನೋವಿಜ್ಞಾನಿಗಳಾದ ಡೇವಿಡ್ ಕಾಮನರ್ ಕಿಡ್ ಮತ್ತು ಇಮ್ಯಾನುಯೆಲ್ ಕ್ಯಾಸ್ಟಾನೊ ಅವರು, ಸಾಹಿತ್ಯಿಕ ಕಥನಗಳನ್ನು ಓದುವಿಕೆಯು ಇತರರ ಭಾವನೆಗಳನ್ನು ತಿಳಿದುಕೊಳ್ಳುವ ಮತ್ತು ಅದನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವನ್ನು ಹೆಚ್ಚಿಸುತ್ತದೆ ಎಂದು ಸಾಬೀತುಪಡಿಸಿದ್ದು, ಅದು ಸಂಕೀರ್ಣ ಸಾಮಾಜಿಕ ಸಂವಹನಗಳನ್ನು ನ್ಯಾವಿಗೇಟ್ ಮಾಡುವ ಪ್ರಮುಖ ಕೌಶಲ್ಯವಾಗಿರುತ್ತದೆ.

1,000 ಮಂದಿ ಭಾಗವಹಿಸಿದ್ದ ಐದು ಪ್ರಯೋಗಗಳ ಸರಣಿಯೊಂದರಲ್ಲಿ, ಯಾದೃಚ್ಛಿಕ ರೀತಿಯಲ್ಲಿ ಗ್ರಂಥಗಳನ್ನು ಓದಲು ನೀಡಲಾಗಿತ್ತು. ಇದರಲ್ಲಿ ಭಾಗವಹಿಸಿದವರು ಬೇರೆಯವರಲ್ಲಿನ ಭಾವನೆಗಳನ್ನು ಸರಿಯಾಗಿ ಗ್ರಹಿಸುವುದು ಹೇಗೆ ಎಂಬುದನ್ನು ಕಂಡುಹಿಡಿಯಲು ಮಾನಸಿಕ ತಂತ್ರಗಳ ಬೇರೆ ಬೇರೆ ಪ್ರಕಾರದ ಸಿದ್ಧಾಂತಗಳನ್ನು (ಥಿಯರಿ ಆಫ್ ಮೈಂಡ್ ಟೆಕ್ನಿಕ್) ಈ ಜೋಡಿಯು ಅದಕ್ಕಾಗಿ ಬಳಸಿತ್ತು. ಸರಿಯಾದ ಗ್ರಹಿಸುವಿಕೆ ಹೇಗೆ ಸಾಧ್ಯವಾಗುತ್ತದೆ? ಎಂಬ ವಿಚಾರದಲ್ಲಿ, ಜನಪ್ರಿಯ ಕಲ್ಪನಾಕಥನಗಳು ಅಥವಾ ಕಲ್ಪನಾಕಥನಗಳಲ್ಲದ ಗ್ರಂಥಗಳಿಗಿಂತ ಸಾಹಿತ್ಯಿಕ ಕಥನಗಳನ್ನು ಓದಿದವರಿಗೇ ಸತತವಾಗಿ ಹೆಚ್ಚಿನ ಅಂಕಗಳು ಲಭ್ಯವಾಗಿದ್ದವು.

“ಸಾಹಿತಿಯ [ಬರಹಗಾರನ] ಕಲ್ಪನೆಯು ಹೊಸ ಲೋಕದೊಳಗೆ ಪ್ರವೇಶಿಸಲು ನಿಮಗೆ ಅನುವು ಮಾಡಿಕೊಡುತ್ತದೆ ಮತ್ತು ಅಲ್ಲಿ ನಿಮ್ಮ ಸ್ವಂತ ದಾರಿಯನ್ನು ನೀವೇ ಸ್ವತಃ ಹುಡುಕಿಕೊಳ್ಳಬೇಕಾಗುತ್ತದೆ. ಸಾಹಿತ್ಯವು ನಿಮ್ಮ ಮನಸ್ಸು ಇತರರ ಮನಸ್ಸನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುವಂತೆ ಮಾಡುತ್ತದೆ" ಎಂದು ಕಿಡ್ ಹೇಳಿದ್ದರು.

ಓದುವ ಅನುಭವವನ್ನು ಕಲ್ಪನೆಗಳಿಂದ ವಾಸ್ತವಿಕ ಜಗತ್ತಿನ ಪರಿಸ್ಥಿತಿಗಳಿಗೆ ವರ್ಗಾಯಿಸುವುದು ಒಂದು ಪ್ರಾಕೃತಿಕ ಲಂಘನವಾಗಿದೆ ಎಂದು ವಾದಿಸಿದ ಕಿಡ್, "ಕಲ್ಪನೆಗಳು ಮತ್ತು ನೈಜ ಸಂಬಂಧಗಳನ್ನು ನ್ಯಾವಿಗೇಟ್ ಮಾಡಲು ಅಂಥದ್ದೇ ಮನೋವೈಜ್ಞಾನಿಕ ಪ್ರಕ್ರಿಯೆಗಳನ್ನು ಬಳಸಲಾಗುತ್ತದೆ. ಸಾಹಿತ್ಯವು ಕೇವಲ ಸಾಮಾಜಿಕ ಅನುಭವದ ಸಿಮ್ಯುಲೇಟರ್ ಅಲ್ಲ, ಬದಲಿಗೆ ಅದೊಂದು ಸಾಮಾಜಿಕ ಅನುಭವವಾಗಿದೆ."

ಕ್ಯಾಸ್ಟಾನೊ ಮತ್ತು ಕಿಡ್ ಸಾಹಿತ್ಯಿಕ ಕಥೆಗಳು ಸಾಮಾಜಿಕ ಸಹಾನುಭೂತಿಯನ್ನು ಸುಧಾರಿಸುತ್ತದೆ ಎಂದು ಸಾಬೀತುಪಡಿಸಿದರು,

ಡೊನ್ನಾ ನಾರ್ಟನ್ (2010) ಅವರು “ಥ್ರೂ ದಿ ಐಸ್ ಆಫ್ ಎ ಚೈಲ್ಡ್” ಎಂಬ ಪುಸ್ತಕದಲ್ಲಿ ಯುವಜನರಿಗಾಗಿ ಸಾಹಿತ್ಯಕ ಮೌಲ್ಯವನ್ನು ಗುರುತಿಸಿದ್ದಾರೆ.

ಮಕ್ಕಳ ಸಾಹಿತ್ಯವು ವಿದ್ಯಾರ್ಥಿಗಳಿಗೆ ಭಾವನಾತ್ಮಕ ಬುದ್ಧಿವಂತಿಕೆ ಮತ್ತು ಸೃಜನಶೀಲತೆಯನ್ನು ಬೆಳೆಸಿಕೊಳ್ಳಲು ನೆರವಾಗುತ್ತದೆ; ಭಾವನಾತ್ಮಕ ಮತ್ತು ನೈತಿಕ ಬೆಳವಣಿಗೆಯನ್ನು ಉತ್ತೇಜಿಸುವ ಶಕ್ತಿಯು ಕಥೆಗಳಿಗಿದೆ. ಮಕ್ಕಳ ಸಾಹಿತ್ಯವು " ಪಾತ್ರಗಳು ನೈತಿಕ ನಿರ್ಧಾರಗಳನ್ನು ತೆಗೆದುಕೊಳ್ಳುವ ಹಾಗೂ ತಮ್ಮ ನಿರ್ಧಾರಗಳಿಗೆ ಕಾರಣಗಳನ್ನು ಪರಿಗಣಿಸುವ ಅನೇಕ ಸಂಕಷ್ಟದ ಕ್ಷಣಗಳನ್ನು ಒಳಗೊಂಡಿರುತ್ತದೆ," ಮಕ್ಕಳನ್ನು ಮಾದರಿಯಾಗಿ ಮಾಡಲು ಒಂದು ಪ್ರಮುಖ ಕೌಶಲ್ಯ (ನಾರ್ಟನ್, 2010, ಪುಟ 34).

ಮಕ್ಕಳ ಸಾಹಿತ್ಯವು ವಿದ್ಯಾರ್ಥಿಗಳು ತಮ್ಮ ಭಾವನೆಗಳ ಕುರಿತು ಆಳವಾಗಿ ಚಿಂತಿಸುವುದನ್ನು ಪ್ರೋತ್ಸಾಹಿಸುತ್ತದೆ. ಮಕ್ಕಳ ಸಾಹಿತ್ಯವೂ ಕೂಡ ಸೃಜನಶೀಲತೆಯನ್ನು ಪ್ರೋತ್ಸಾಹಿಸುತ್ತದೆ. ನಾರ್ಟನ್ "ಕಲ್ಪನೆಯನ್ನು ಪೋಷಿಸುವ ಮತ್ತು ವಿಸ್ತರಿಸುವಲ್ಲಿ ಸಾಹಿತ್ಯವು ತನ್ನ ಪಾತ್ರವನ್ನು ನಿರ್ವಹಿಸುತ್ತದೆ" (2010, ಪುಟ 4).

ಮಕ್ಕಳ ಸಾಹಿತ್ಯವು ವಿದ್ಯಾರ್ಥಿಗಳ ಆಂತರಿಕ ಕಲ್ಪನೆಯ ಬೆಳವಣಿಗೆಗೆ ಉತ್ತೇಜನ ನೀಡುತ್ತದೆ. ತಮ್ಮ ಆರಂಭದ ವರ್ಷಗಳಲ್ಲಿ ಮಕ್ಕಳು ಬಹಳ ಸುಲಭವಾಗಿ ಪ್ರಭಾವಿತರಾಗುತ್ತಾರೆ ಹಾಗೂ ಮಕ್ಕಳ ಸಾಹಿತ್ಯವು ಅವರನ್ನು ಕಾಳಜಿಯುಳ್ಳ, ಬುದ್ಧಿವಂತ ಮತ್ತು ಸ್ನೇಹಪರ ವ್ಯಕ್ತಿಗಳಾಗಿ ರೂಪಿಸಲು ಸಹಾಯ ಮಾಡಬಹುದು. ವಿಕಾಸಾತ್ಮಕ ಮನಶ್ಶಾಸ್ತ್ರಜ್ಞ ಜೀನ್ ಪಿಯಾಗೆಟ್ ಅವರ ಪ್ರಕಾರ, ವಿದ್ಯಾರ್ಥಿಗಳು ಪೂರ್ವ-ಕಾರ್ಯನಿರ್ವಹಣೆಯಿಂದ ಸೃಜನಶೀಲ ಬೆಳವಣಿಗೆಯ ಕಾರ್ಯನಿರ್ವಹಣೆಯ ಹಂತಕ್ಕೆ ಹೋದಾಗ, ಅವರು ಕಡಿಮೆ ಅಹಂಕಾರಿಗಳಾಗುತ್ತಾರೆ. ಶಾಲಾಪೂರ್ವ ಮತ್ತು ಶಿಶುವಿಹಾರದ ವಿದ್ಯಾರ್ಥಿಗಳು ಸಂಪೂರ್ಣವಾಗಿ ಸ್ವಕೇಂದ್ರೀತರಾಗಿರಬಹುದು, ವಿದ್ಯಾರ್ಥಿಗಳು ಬೆಳೆದಂತೆಲ್ಲಾ, ಅವರು ಇತರರ ದೃಷ್ಟಿಕೋನಗಳನ್ನು ಗಣನೆಗೆ ತೆಗೆದುಕೊಳ್ಳಲು ಪ್ರಾರಂಭಿಸುತ್ತಾರೆ.

"ಅನ್ಯರ ದೃಷ್ಟಿಕೋನಗಳನ್ನು ಅರ್ಥೈಸಿಕೊಳ್ಳಬಲ್ಲವರಾಗುವುದು ಹಾಗೂ ಕ್ಲೇಶಕ್ಕೆ ಒಳಗಾಗದಿರುವುದು ಪ್ರಮುಖವಾದ ಕೌಶಲ್ಯವಾಗಿದ್ದು, ಅದನ್ನು ಹಿರಿಯರು ಮಕ್ಕಳಲ್ಲಿ ಬೆಳೆಸಬೇಕಾಗಿದೆ. ಏಕೆಂದರೆ "ಅನ್ಯರ ಭಾವನೆಗಳು ಮತ್ತು ದೃಷ್ಟಿಕೋನಗಳ ತಿಳುವಳಿಕೆಯು ಸ್ವೀಕಾರಾರ್ಹ ಸಂಬಂಧಗಳಿಗೆ ಅತ್ಯವಶ್ಯಕ" ಎಂದು ನಾರ್ಟನ್ ಹೇಳಿದ್ದಾರೆ (2010, ಪುಟ 27).

ಮಕ್ಕಳ ಸಾಹಿತ್ಯವು ವಿದ್ಯಾರ್ಥಿಗಳು ಬೇರೆಯವರನ್ನು ಮತ್ತು ಅವರ ಭಿನ್ನಾಭಿಪ್ರಾಯಗಳನ್ನು ಸ್ವೀಕರಿಸಲು ಪ್ರೋತ್ಸಾಹಿಸುವ ಮೂಲಕ ಸಾಮಾಜಿಕ ಬೆಳವಣಿಗೆಯನ್ನು ಉತ್ತೇಜಿಸಬಹುದಾಗಿದೆ. ಶಾಲಾ ವಾತಾವರಣ ಹಾಗೂ ಮನೆ, ಈ ಎರಡೂ ಸ್ಥಳದಲ್ಲಿ ಮಕ್ಕಳ ಸಾಹಿತ್ಯವು ಅತ್ಯಂತ ಮೌಲ್ಯಯುತವಾಗಿದೆ. ಮಕ್ಕಳ ಸಾಹಿತ್ಯವು ಸಾಹಿತ್ಯದ ಜೊತೆಗೆ ಸಾಂಸ್ಕೃತಿಕ ಜ್ಞಾನ, ಭಾವನಾತ್ಮಕ ಬುದ್ಧಿವಂತಿಕೆ ಮತ್ತು ಸೃಜನಶೀಲತೆ, ಸಾಮಾಜಿಕ ಮತ್ತು ವ್ಯಕ್ತಿತ್ವ ವಿಕಸನ ಹಾಗೂ ಸಾಹಿತ್ಯಿಕ ಇತಿಹಾಸವನ್ನು ಸೃಷ್ಟಿಸುವ ಅವಕಾಶಗಳನ್ನು ಒದಗಿಸಿಕೊಡುತ್ತದೆ. ಮಕ್ಕಳನ್ನು ಗುಣಮಟ್ಟದ ಸಾಹಿತ್ಯಕ್ಕೆ ಒಡ್ಡುವುದರಿಂದಾಗಿ ಅದು ಜವಾಬ್ದಾರಿಯುತ, ಯಶಸ್ವಿ ಮತ್ತು ಕಾಳಜಿಯುಳ್ಳ ವ್ಯಕ್ತಿಗಳನ್ನು ನಿರ್ಮಿಸಲು ಕೊಡುಗೆ ನೀಡುತ್ತದೆ.

**ತರಗತಿಯೊಳಗೆ ಕೆಲ ಸಾಹಿತ್ಯಿಕ ಅನುಭವಗಳು**

ಇಲ್ಲಿ ನಾನು ಸಂವೇದನೆಗಳ ಧ್ವನಿಗಳನ್ನು ಕೇಳಿಸುವ ತರಗತಿಯೊಳಗಿನ ಕೆಲವು ಸಾಹಿತ್ಯಿಕ ಅನುಭವಗಳ ಬಗ್ಗೆ ಹೇಳಲು ಬಯಸುತ್ತೇನೆ.

ಒಬ್ಬ ಶಿಕ್ಷಕರು (ಸುಶೀಲ್ ಜಿ) ನನಗೆ ಪ್ರೇಮಚಂದ್ ಅವರ ಕಥೆಯನ್ನು ಹೇಳಿದರು. ಈದ್ಗಾದಲ್ಲಿ ನಡೆದ ರಂಜಾನ್ ಜಾತ್ರೆಯಲ್ಲಿ ಎಲ್ಲಾ ಮಕ್ಕಳು ವಿವಿಧ ಆಟಿಕೆಗಳನ್ನು ಖರೀದಿಸುತ್ತಿದ್ದರು. ಆದರೆ ಹಮೀದ್ ಬಳಿ ಕೇವಲ ಮೂರು ಪೈಸೆ ಮಾತ್ರ ಇತ್ತು ಹಾಗೂ ಅವನು ಆ ಹಣದಿಂದ ತನ್ನ ಅಜ್ಜಿ ಅಮಿನಾಗಾಗಿ ಚಿಮುಟ ಖರೀದಿಸಿ ಹಿಂದಿರುಗುತ್ತಾನೆ. ಹಮೀದ್ ನನ್ನು ಮಡಿಲಲ್ಲಿ ಕೂರಿಸಿಕೊಂಡು ಆ ಅಜ್ಜಿ ಅಳತೊಡಗಿದಳು. ಈ ಕಥೆಯಲ್ಲಿ ಹೀಗೆ ಬರೆಯಲಾಗಿತ್ತು "ಆಕೆಯ ವಾತ್ಸಲ್ಯವು ಕಿಚ್ಚಿಡುವ ಥರದ್ದಾಗಿರಲಿಲ್ಲ ಮತ್ತು ಅದರ ಎಲ್ಲಾ ಯಾತನೆಯನ್ನು ಮಾತುಗಳಲ್ಲಿ ಶ್ರುತಪಡಿಸುವಂಥದ್ದಾಗಿರಲಿಲ್ಲ, ಅದೊಂದು ನಿರಂತರವಾದ ರಸಭರಿತ ಮತ್ತು ರುಚಿಭರಿತ ಮೌನ ತುಂಬಿದ ವಾತ್ಸಲ್ಯವಾಗಿತ್ತು". ಅದೊಂದು ಮೂಕ ವಾತ್ಸಲ್ಯ, ಈ ಭಾವನೆಯನ್ನು ಪದಗಳಲ್ಲಿ

ವ್ಯಕ್ತಪಡಿಸುವುದು ಅಸಾಧ್ಯ. ಮುಂದೆ ಪ್ರೇಮಚಂದ್ ಜಿ ಹೀಗೆ ಬರೆಯುತ್ತಾರೆ; "ಮಗುವಿನಲ್ಲಿ ಎಷ್ಟೊಂದು ತ್ಯಾಗ, ಎಷ್ಟೊಂದು ಸೌಹಾರ್ದ ಮತ್ತು ಎಷ್ಟೊಂದು ವಿವೇಚನೆ ಇದೆ!" ಈ ಪದಗಳನ್ನು ನಾವು ಅದೆಂಥ ಉತ್ಸಾಹದಿಂದ ಓದುತ್ತೇವೆಂದರೆ, ಹಮೀದನ ಗುಣವು ನಮ್ಮ ಕಣ್ಣೆದುರಿನಲ್ಲಿ ಬಹಳ ಎತ್ತರಕ್ಕೆ ಏರಿರುತ್ತದೆ, ಅಂದರೆ ನಾವು ಹಮೀದ್ನ ಈ ನೆರಳಿನಲ್ಲಿ ಈ ಪದಗಳನ್ನು ನೋಡುತ್ತಿದ್ದೇವೆ, ಆದರೆ ವಾಸ್ತವದಲ್ಲಿ ಅಜ್ಜಿ ಕೂಡ ಅದೇ ರೀತಿ ಯೋಚಿಸುತ್ತಿದ್ದರೆ ಅದರ ಅರ್ಥವು ಒಂದಿಷ್ಟು ವಿಭಿನ್ನವಾಗಿರುತ್ತದೆ, ಏಕೆಂದರೆ ಆಕೆ ಹಮೀದ್ನ ಬಾಲ್ಯವನ್ನು ಉಳಿಸಲು ಅಪಾರ ಶ್ರಮ ವಹಿಸಿರುವುದಲ್ಲದೆ ತಮ್ಮ ಕೈಲಾದಷ್ಟು ಪ್ರಯತ್ನವನ್ನು ಮಾಡಿದ್ದಾಳೆ. ಆದರೆ ಹಮೀದ್‌ನ ತ್ಯಾಗ, ತಿಳುವಳಿಕೆ ಮತ್ತು ವಿವೇಚನೆಯ ಉದ್ದೀಪನ ಬಂದಿದೆಯೆಂದರೆ ಅವನು ತನ್ನ ಸಮಯಕ್ಕೆ ಮುನ್ನವೇ ಬೆಳೆದು ಬಿಟ್ಟಿದ್ದಾನೆ. ಅಸಲಿಗೆ ಅಜ್ಜಿಯು ಅಳುತ್ತಿರುವುದು ತನ್ನ ಈ ವೈಫಲ್ಯದ ಕಾರಣಕ್ಕಾಗಿ. ಈ ಅಳು ಏಕೆ ನಿರರ್ಥಕವಾಗಿದೆಯೆಂದರೆ ಅದು ಹಮೀದ್ ಚಿಮುಟ ಖರೀದಿಯು ಅಜ್ಜಿಯನ್ನು ದಿಗ್ಭ್ರಮೆಗೊಳಿಸಿದೆ. ಅಂತೆಯೇ, ಅದೇ ಮಾತುಗಳು ಸಂವೇದನಾಶೀಲ ಶಿಕ್ಷಕರ ಬಳಿಗೆ ಬಂದಾಗ ಅವರು ತಮಗಾಗುತ್ತಿರುವ ಅದೇ ಅನುಭೂತಿ ಹಾಗೂ ಅನುಭವವನ್ನು ತಮ್ಮ ಮಕ್ಕಳಿಗೂ ಕೂಡ ಕಟ್ಟಿಕೊಡಲು ಸಾಧ್ಯವಾಗುತ್ತದೆ.

ಇನ್ನೊಂದು ತರಗತಿಯ ಉದಾಹರಣೆಯನ್ನು ತೆಗೆದುಕೊಂಡರೆ, ಒಬ್ಬ ಶಿಕ್ಷಕರು (ದುರ್ಗೇಶ್ ಜಿ) ಐದನೇ ತರಗತಿಯಲ್ಲಿ ನಾಗಾರ್ಜುನನ ಕವಿತೆಯಾದ ಅಕಾಲ್ ಔರ್ ಉಸ್‌ಕೆ ಬಾದ್ (ಬರಗಾಲ ಮತ್ತು ಆ ನಂತರ) ಅನ್ನು ಕಲಿಸುತ್ತಿದ್ದರು. ಒಲೆಯು ಅದೆಷ್ಟೋ ದಿನಗಳವರೆಗೆ ಅಳುತ್ತಿತ್ತು, ಗಿರಣಿಯು ಬೇಸರದ ಬೇಗೆಯಲ್ಲಿ ಬೇಯುತ್ತಿತ್ತು, ಅದೆಷ್ಟೋ ದಿನಗಳವರೆಗೆ ಒಕ್ಕಣ್ಣಿನ ಹೆಣ್ಣುನಾಯಿಯು ಅವನ ಪಕ್ಕದಲ್ಲಿಯೇ ಮಲಗಿರುತ್ತಿತ್ತು ಎಂಬ ಸಾಲುಗಳು ಅದರಲ್ಲಿದ್ದವು. ಬರಗಾಲದ ಬಗ್ಗೆ ವಿವರಿಸಲು ನಾನು ಈ ಚಿಕ್ಕ ಮಕ್ಕಳಿಗೆ ಹಸಿವನ್ನು ಅನುಭವಿಸುವಂತೆ ಮಾಡುತ್ತಿದ್ದೆ ಎಂದು ಅವರು ಹೇಳುತ್ತಾರೆ.

ಒಂದು ವೇಳೆ ಯಾವುದೇ ಮನೆಯಲ್ಲಿ ಬಹಳ ದಿನಗಳವರೆಗೆ ಒಲೆ ಉರಿಯದಿದ್ದರೆ ಇಲ್ಲವೇ ಮನೆಯಲ್ಲಿ ಅಡುಗೆಯನ್ನೇ ಮಾಡಿರದಿದಿದ್ದರೆ, ಅದಕ್ಕೆ ಕಾರಣಗಳೇನಿರಬಹುದು. ಈ ಕವಿತೆಯ ಮುಂದಿನ ದೃಶ್ಯಗಳ ಕುರಿತು ಮಕ್ಕಳೊಂದಿಗೆ ಮಾತನಾಡುತ್ತಿರುವಾಗಲೇ ಭಾವಪರವಶರಾಗಿ ಕಣ್ಣುಗಳು ತುಂಬಿಬಂದು ಅಳತೊಡಗುತ್ತಾರೆ, ಅವರ ಜೊತೆಜೊತೆಗೆ ಇಡೀ ತರಗತಿಯೇ ಅಳಲಾರಂಭಿಸುತ್ತದೆ. ಕವಿತೆ ಹೀಗೆ ಜೀವಂತವಾಗುತ್ತದೆ. ಅಲ್ಲಿ ಕರುಣೆಯ ಅನನ್ಯ ಭಾವವು ಹುಟ್ಟಿಕೊಂಡಿದ್ದು ಬರೀ ಬರಗಾಲದಿಂದಲ್ಲ, ಬದಲಿಗೆ ಹಸಿವು, ಬಡತನದಿಂದ. ಮಕ್ಕಳು ಕೇವಲ ಮನುಷ್ಯರಷ್ಟೇ ಅಲ್ಲ ನಾಯಿ, ಬೆಕ್ಕು, ಹಲ್ಲಿ, ಕಾಗೆ ಸಹಿತ ಇತರೆ ಜೀವಿಗಳ ಹಸಿವನ್ನು ಕೂಡ ಅನುಭವಿಸಿದ್ದರು.

ಅದೇ ರೀತಿ, 8ನೇ ತರಗತಿಯಲ್ಲಿ ರವೀಂದ್ರನಾಥ ಟ್ಯಾಗೋರರ ಕಥೆಯಾದ 'ಭಿಕ್ಷುಕ ಮತ್ತು ದಾನಿ ಮಕ್ಕಳೊಂದಿಗೆ' ಕಥೆಯನ್ನು ಶಿಕ್ಷಕಿ (ಸರೋಜ್ ಬೆಹನ್‌ಜಿ) ಕಲಿಸಿಕೊಡುತ್ತಿದ್ದರು. ಮೊದಲಿಗೆ ಅವರೇ ಸಂಪೂರ್ಣ ಭಾರಪರವಶರಾಗಿ ಆ ಕಥೆಯನ್ನು ಓದಿ ಹೇಳುತ್ತಾರೆ, ಮಕ್ಕಳು ಆ ಕಥೆಗೆ ಕಿವಿಗೊಡುತ್ತಾ ಅದರಲ್ಲೇ ತನ್ಮಯರಾಗುತ್ತಾರೆ. ನಂತರ ಅವರು ಕಥೆಯ ಬಗ್ಗೆ ಮಕ್ಕಳೊಂದಿಗೆ ಮಾತುಕತೆ ನಡೆಸುತ್ತಾರೆ. ಕಥೆಯಲ್ಲಿ ಯಾವ ಪಾತ್ರಗಳು ಬರುತ್ತವೆ? ಮಕ್ಕಳು ಹೇಳುತ್ತಾರೆ, ಒಬ್ಬ ಮುದುಕಿ, ಒಂದು ಮಗು, ಒಬ್ಬ ಧನಿಕ ಹಾಗೂ ಒಬ್ಬ ಕರಣಿಕನಿದ್ದಾನೆ.

ಅವರು ಮತ್ತೆ ಆ ಮುದುಕಿಯ ಕುರಿತು ಕೇಳುತ್ತಾರೆ, ಆಕೆಯ ವಯಸ್ಸೇನು? ಆಕೆ ಏನು ಮಾಡುತ್ತಾಳೆ? ಪರಸ್ಪರ ಸಂಭಾಷಣೆಯ ಮೂಲಕ ಮಕ್ಕಳ ಭಿತ್ತಿಯಲ್ಲಿ ಪ್ರತಿಯೊಂದು ಪಾತ್ರದ ಒಂದು ಸಂಪೂರ್ಣ ಚಿತ್ರಣವು ರೂಪುಗೊಳ್ಳುವಂತೆ ಮಾಡುತ್ತಾರೆ. ಈ ಪಾತ್ರಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಅವರು ಕಥೆಯ ಆ ಪಾತ್ರಗಳ ವಿಶೇಷತೆಗಳನ್ನು ಹೊರಗೆಡಹುವ ಆ ವಾಕ್ಯಗಳನ್ನು ಪುನರಾವರ್ತಿಸುತ್ತಾರೆ, ಉದಾಹರಣೆಗೆ, ಆಕೆ ಪ್ರತಿದಿನ ದೇವಾಲಯದ ಬಾಗಿಲಿನ ಬಳಿ ಹೋಗಿ ನಿಲ್ಲುತ್ತಾಳೆ, ದೇಗುಲಕ್ಕೆ ಭೇಟಿ ನೀಡಲು ಬರುವವರನ್ನು ಕರೆಯುತ್ತಾಳೆ, ಆಕೆಯ ಮಾತಿನ ಮಾಧುರ್ಯವು ಭಕ್ತರನ್ನು ಆಕರ್ಷಿಸುತ್ತದೆ, ಮಂದಿ ಆ ದೃಷ್ಟಿಹೀನ ಮುದುಕಿಯಿಂದ ಸುವಾಸನಾಭರಿತ ಹೂವುಗಳನ್ನು ತೆಗೆದುಕೊಂಡು, ಹಣವನ್ನು ಆಕೆಯ ಚೀಲಕ್ಕೆ ಹಾಕಿ ಮುಂದೆ ಸಾಗುತ್ತಾರೆ.

ಮಕ್ಕಳು ಹೇಳುತ್ತಾರೆ, ಆಕೆ ವೃದ್ಧೆಯಾಗಿದ್ದಳು, ದೃಷ್ಟಿಹೀನಳಾಗಿದ್ದಳು ಹಾಗೂ ಮಧುರವಾಗಿ ಮಾತನಾಡುತ್ತಿದ್ದಳು, ಆದರೆ ಹೂವುಗಳಿಗೆ ಇಂತಿಷ್ಟೇ ಎಂದು ಹಣವನ್ನು ಕೇಳುತ್ತಿರಲಿಲ್ಲ. ಅವರು ಕತೆಯಲ್ಲಿನ ಘಟನೆಗಳ ಬಗ್ಗೆ ಮಾತನಾಡುತ್ತಿದ್ದರು. ಅವರು ಕೆಲವು ವಾಕ್ಯಗಳಲ್ಲಿ ನಿಲ್ಲಿಸಿಬಿಡುತ್ತಿದ್ದರು, ಹಾಗೂ ಆ ಸಾಲುಗಳ ಅರ್ಥವೇನೆಂಬುದನ್ನು ಮಕ್ಕಳಿಂದಲೇ ತಿಳಿದುಕೊಳ್ಳುತ್ತಿದ್ದರು. ಮಮತೆಯ ಮಡಿಲನ್ನು ಪಡೆದ ನಂತರ ಮಗು ಎಲ್ಲವನ್ನೂ ಮರೆತಿತ್ತು. ಮಗುವಿನ ಸುಖಮಯ ಭವಿಷ್ಯವನ್ನು ಹೆಣೆಯುತ್ತಿದ್ದಳು. ಆಕೆಯ ವಾತ್ಸಲ್ಯದ ಬಗ್ಗೆ ದೇವಸ್ಥಾನದ ಅರ್ಚಕನು ಹೆಮ್ಮೆ ಪಡುತ್ತಿದ್ದನು. ಅಲ್ಲದೆ ಬೆಹನ್‌ಜಿ ಅವರು, 'ಸೇಠ್ ಬನಾರಸಿ ದಾಸ್ ಅವರನ್ನು ಒಬ್ಬ ಭಕ್ತ ಮತ್ತು ಧರ್ಮಾತ್ಮನ ರೂಪದಲ್ಲಿ ಗುರುತಿಸಿಕೊಂಡಿದ್ದರು' ಎಂಬುದನ್ನು ಉಲ್ಲೇಖಿಸಿ ಈ ಕೆಲವು ವಾಕ್ಯಗಳ ಬಗ್ಗೆ ಹೀಗೇಕೆ ಬರೆದಿದ್ದಾರೆ ಎಂದು ಪ್ರಶ್ನಿಸುತ್ತಿದ್ದರು. ಇಲ್ಲಿ ಗುರುತಿಸಿಕೊಂಡಿದ್ದರು ಎಂದು ಏಕೆ ಬರೆಯಲಾಗಿದೆ? ಸೇಠ್‌ಜಿ ಒಬ್ಬ ಭಕ್ತ ಮತ್ತು ಧರ್ಮಾತ್ಮನಾಗಿದ್ದ ಎಂದು ಏಕೆ ಬರೆದಿಲ್ಲ, ಇಲ್ಲವೇ, ಕರಣಿಕನು ಸೇಠ್‌ಜಿಯ ಕಡೆ ನಿಗೂಢ ದೃಷ್ಟಿಯಿಂದ ನೋಡುತ್ತಾ, ನಿಮ್ಮ ಹೆಸರಿನಲ್ಲಿ ಏನೂ ಸಂಗ್ರಹವಾಗಿಲ್ಲ ಎಂದು ಹೇಳಿದನು. ಇಲ್ಲಿ ನಿಗೂಢ ದೃಷ್ಟಿಯ ಅರ್ಥವೇನು, ಇತ್ಯಾದಿಗಳನ್ನು ಅವರು ಪ್ರಶ್ನಿಸುತ್ತಿದ್ದರು. ಹೀಗೆ ಅವರು ಈ ಪಾಠದ ಭಾವನಾತ್ಮಕ ಭಾಗಗಳನ್ನು ಮಕ್ಕಳಿಗೆ ತಲುಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಮಕ್ಕಳು ತಾವು ನೋಡಿದ ಯಾವುದೋ ಸ್ಥಳದ ವರ್ಣನೆಯನ್ನು ಮಾಡಿ ಒಂದು ಪತ್ರವನ್ನು ಬರೆಯಲು ಶಿಕ್ಷಕರೊಬ್ಬರು ಸೂಚಿಸಿದ್ದಾರೆ. ಮಕ್ಕಳು ಎಂಥ ವಾಕ್ಯಗಳನ್ನು ಬರೆಯುತ್ತಿದ್ದರೆಂದರೆ, ನಾನು ನರ್ಮದೆಯ ಸೇಠಾನಿ ಘಾಟ್ ನೋಡಿದೆ, ಅದು ಬಹಳ ಸುಂದರವಾಗಿತ್ತು, ಅಲ್ಲಿ ಅನೇಕ ದೇವಾಲಯಗಳಿವೆ. ಅಲ್ಲಿಗೆ ತುಂಬ ಜನರು ಬರುತ್ತಾರೆ. ಶಿಕ್ಷಕರು ಮಕ್ಕಳ ಜೊತೆಗೆ ಸಂಭಾಷಣೆ ನಡೆಸುತ್ತಾ, 'ಬಹಳ ಸುಂದರವಾಗಿದೆ' ಎನ್ನುವುದನ್ನು ಹೇಗೆ ಅರ್ಥೈಸಬಹುದು ಎಂದು ಕೇಳುತ್ತಾರೆ. ಒಂದು ದೇವಾಲಯವು ಇನ್ನೊಂದು ದೇವಾಲಯಕ್ಕಿಂತ ಹೇಗೆ ಭಿನ್ನವಾಗಿರುತ್ತದೆ? ಆ ಜಾಗದ ವಿಶೇಷವೇನೆಂದು ಹೇಳಲು ಆ ಜಾಗದಲ್ಲಿ ನಿಂತು ಜಾಗರೂಕತೆಯಿಂದ ಆ ಜಾಗವನ್ನು ನೋಡಬೇಕು ಎಂದು ಅವರು ಇವರಿಗೆ ಹೇಳುತ್ತಾರೆ. ಯಾವುದೇ ಒಬ್ಬ ವ್ಯಕ್ತಿಯನ್ನು ನೋಡಲು ಘಾಟಿಗೆ ಬರುವವರು ಎಂಥವರಿದ್ದಾರೆ. ಅವರು ಘಾಟಿಗೆ ಬಂದು ಏನು ಮಾಡುತ್ತಾರೆ, ಅಲ್ಲಿ ಎಷ್ಟು ಹೊತ್ತು ಇರುತ್ತಾರೆ. ಬಳಿಕ ಶಿಕ್ಷಕರು ಏನು ಸಲಹೆ ನೀಡುತ್ತಾರೆಂದರೆ, ಈ ದಿನ ನಾವೆಲ್ಲರೂ ಒಂದೊಂದು ಮರವನ್ನು ನೋಡೋಣ. ಹಾಗೂ ನಮ್ಮ ನಮ್ಮ ಮರದ ಬಗ್ಗೆ ಮಾತನಾಡೋಣ. ನೀವು ಆ ಮರದ ಬಗ್ಗೆ ಎಲ್ಲವನ್ನೂ ನಮಗೆ ಹೇಳಬಲ್ಲಷ್ಟು ನೀವು ನಿಮ್ಮ ಮರದ ಬಗ್ಗೆ ನೋಡಬೇಕು. ಜೊತೆಗೆ ಅದು ನಾವು ನಿಮ್ಮ ಮರವನ್ನು ನೋಡಲು ನಮಗೆ ಕುತೂಹಲ ಮೂಡಿಸುವಂತಿರಬೇಕು ಹಾಗೂ ಬಹುಶಃ ನೀವು ಯಾವ ಮರದ ಬಗ್ಗೆ ಮಾತನಾಡುತ್ತಿರುವಿರಿ ಎಂದು ನಾವು ಹೇಳುವಂತಿರಬೇಕು. ಮಕ್ಕಳು ತಮ್ಮ ಮರದ ಮೇಲೆ ನಡೆದಾಡುವ ಇರುವೆಯಿಂದ ಹಿಡಿದು ಅದರ ಮೇಲೆ ಕುಳಿತ ಪಕ್ಷಿ ಮತ್ತು ಎಲೆಗಳ ರಚನೆ ಇತ್ಯಾದಿಗಳ ಕಡೆಗೂ ತಮ್ಮ ಗಮನವನ್ನು ಹರಿಸಿದರು.

ಅದೇ ರೀತಿ ನನ್ನ ತರಗತಿಯೊಂದರಲ್ಲಿ ಡಾ.ಪರಶುರಾಮ ಶುಕ್ಲಾ ಅವರ 'ಉಯಿಲಿನ ರಹಸ್ಯ'ವನ್ನು ಕತೆಯನ್ನು ಓದುವ ಸಂದರ್ಭದಲ್ಲಿ ಮಕ್ಕಳು ಹಲವು ಪ್ರಶ್ನೆಗಳನ್ನು ಎತ್ತಿದರು. ಈ ಕಥೆಯನ್ನು ಓದುವ ಸಂದರ್ಭದಲ್ಲಿ, 'ಈ ಕಥೆಗೆ ನೀವು ಏನನ್ನಾದರೂ ಸೇರ್ಪಡೆ ಮಾಡಲು ಬಯಸಿದರೆ, ನೀವು ಅದನ್ನು ತಿಳಿಸಬಹುದು' ಎಂದು ನಾವು ಹೇಳಿದೆವು. ಈ ಕತೆಯಲ್ಲಿ "ಒಬ್ಬ ವೃದ್ಧ ರೈತನಿಗೆ ನಾಲ್ಕು ಗಂಡು ಮಕ್ಕಳಿದ್ದರು ಮತ್ತು ಒಬ್ಬಳು ತುಂಬಾ ಸುಂದರವಾದ ಮಗಳಿದ್ದಳು" ಎಂಬ ಒಂದು ವಾಕ್ಯವಿದೆ. ನಂದನಿ ಕೇಳಿದ, 'ಕತೆಗಾರನು ಹುಡುಗರನ್ನು ಸುಂದರವಾಗಿದ್ದರು ಅಥವಾ ನಾಲ್ಕು ಗಂಡು ಮಕ್ಕಳು ಹಾಗೂ ಒಬ್ಬ ಮಗಳಿದ್ದಳು ಎಂದು ಎಂದು ಏಕೆ ಬರೆಯಲಿಲ್ಲ?'. ನಾನು ಹೇಳಿದೆ, “ಹೌದು ಹಾಗೆ ಬರೆಯಬೇಕಿತ್ತು, ಆದರೆ ಕಥೆಯ ಮುಂದಿನ ಭಾಗಕ್ಕೆ ಈ ಪದದ ಅಗತ್ಯವಿರಬಹುದು'. ಕಥೆ ಮುಂದೆ ಸಾಗುತ್ತದೆ.

ಒಬ್ಬ ರೈತನಿದ್ದನು. ಆತ ದೂರದೃಷ್ಟಿ ಹೊಂದಿರುವ ಭಾರಿ ಬುದ್ಧಿವಂತನೂ ನ್ಯಾಯಪ್ರಿಯನೂ ಆಗಿದ್ದನು. ತನ್ನ ಆಸ್ತಿಯನ್ನು ಮೂರು ಭಾಗಗಳಾಗಿ ವಿಂಗಡಿಸುವಂತೆ ಉಯಿಲು ಮಾಡಿದ ಬಳಿಕ ಆತ ಮರಣ ಹೊಂದುತ್ತಾನೆ. ಈ ಉಯಿಲಿನ ಜಗಳವನ್ನು ಇತ್ಯರ್ಥಗೊಳಿಸುವಂತೆ ಕೋರಲು ನಾಲ್ವರು ಸಹೋದರರು ತಮ್ಮ ಸಹೋದರಿಯೊಂದಿಗೆ ಮಹಾರಾಜರ ಅರಮನೆಯನ್ನು ತಲುಪುತ್ತಾರೆ. ನಾಲ್ವರು ಸಹೋದರರೊಂದಿಗೆ ಬಂದಿದ್ದ ಯುವತಿಯ ಮೇಲೆ ಮಹಾರಾಜನ ಕಣ್ಣು ಬಿತ್ತು. ಮಹಾರಾಜನಿಗೆ ಆ

ಯುವತಿ ತುಂಬಾ ಇಷ್ಟವಾದಳು. ಅದಲ್ಲದೆ ಆಕ್ಷೇಪಣೆ ಇದ್ದ  ಸಾಲಿನ ಬಗೆಗೂ ಚರ್ಚೆಯಾಯಿತು. ಮುಂದೆ ಕತೆಯಲ್ಲಿ, ಮಹಾರಾಜರು ಒಬ್ಬ ಸಹೋದರನನ್ನು ಜೈಲಿಗೆ ಹಾಕಲು ನಿರ್ಧರಿಸಿದರಲ್ಲದೆ, (ಏಕೆಂದರೆ ಆತ ಮಹಾರಾಜರು ನೀಡಿದ ಪ್ರಲೋಭನೆಗೆ ಒಳಗಾಗಿದ್ದ) ಇತರೆ ಮೂವರು ಸಹೋದರರಿಗೆ ಆಸ್ತಿಯನ್ನು ಹಂಚಲು ನಿರ್ಣಯಿಸಿದರು ಹಾಗೂ ಆ ಯುವತಿಯನ್ನು ಮದುವೆಯಾದರು. ಮಕ್ಕಳು ತಮ್ಮ ತಿಳುವಳಿಕೆ ಮತ್ತು ತಾರ್ಕಿಕತೆಯಿಂದ ಈ ಕಥೆಯ ಬಗ್ಗೆ ಚರ್ಚಿಸಿದರು. ಬಹುಶಃ ಲೇಖಕನು ತನ್ನ ಕಥೆಯ ಕುರಿತು ಅಂತಹ ಟೀಕೆಗಳನ್ನು ಎಂದೂ ಕೇಳಿರಲಿಕ್ಕಿಲ್ಲ.

ಇಂತಹ ಅನುಭವಗಳ ವ್ಯಾಪ್ತಿಗಾಗಿ ಕತೆ, ಕವನಗಳ ನೆರವು ಪಡೆದು ಸಂವೇದನೆಯ ಸೃಷ್ಟಿಯಲ್ಲಿ ಮಕ್ಕಳ ಜೊತೆಜೊತೆಗೆ ಒಂದಿಷ್ಟು ಹೆಜ್ಜೆಗಳನ್ನು ಮುಂದಿಡಬಹುದು. ಮಕ್ಕಳಿಗೆ ಬಾಲ್ಯದಲ್ಲೇ ಭಾವನೆಗಳು, ಸಂವೇದನೆಗಳು, ವೈವಿಧ್ಯತೆಯನ್ನು ಅರ್ಥೈಸುವಿಕೆ, ವೈವಿಧ್ಯತೆಯ ಗೌರವಿಸುವಿಕೆ, ಇತರೆ ದೃಷ್ಟಿಕೋನಗಳಿಂದ ನೋಡುವಿಕೆ, ಸೌಂದರ್ಯದ ಅನುಭೂತಿ, ಸೂಕ್ಷ್ಮತೆಯನ್ನು ಗಮನಿಸುವಿಕೆ, ಸಾಮಾನ್ಯ ವಿಷಯಗಳ ಅನನ್ಯತೆಯ ಗುರುತಿಸುವಿಕೆ, ಪದಗಳ ಹಿಂದೆ ಅಡಗಿರುವ ಅರ್ಥಗಳ ಅರಿಯುವಿಕೆ, ಪ್ರಕೃತಿಯ ವೀಕ್ಷಣೆ, ಪ್ರಕೃತಿಯೊಂದಿಗೆ ಸಂಭಾಷಣೆಯಂಥ ಅನೇಕ ವಿಷಯಗಳಿರುವ ಸಾಹಿತ್ಯನ್ನು ಓದಲು ಅವಕಾಶವನ್ನು ಮಾಡಿಕೊಡುವ ಮೂಲಕ ಅವರು ಮುಂದೆ ಬರುವಂತೆ ಮಾಡಬಹುದು.

ಸಾಹಿತ್ಯದಲ್ಲಿ ಆ ಪದಗಳೇ ಸಂವೇದನೆಗಳನ್ನು ಭಾವನೆಗಳಾಗಿ ತಿಳಿಸಬಲ್ಲವು. ಸಾಹಿತ್ಯದಲ್ಲಿ ನಡುಕ, ಅಳುವಿಕೆ (ಕಣ್ಣೀರು), ಸಂತೋಷವಾಗಿರುವುದು (ನಗುವುದು, ಖುಷಿಯಾಗಿರುವುದು) ಇತ್ಯಾದಿ ಶಾರೀರಿಕ ಸಂವಂಹನಗಳ ಮೂಲಕ ಭಾವನೆಗಳ ಆವೇಗಗಳಿಗೆ ದೈಹಿಕ ಅಭಿವ್ಯಕ್ತಿಗಳನ್ನು ಪದಗಳ ಮೂಲಕ ವ್ಯಕ್ತಪಡಿಸಲಾಗುತ್ತದೆ. ಸಾಹಿತ್ಯದಲ್ಲಿ Empathizing ಸಹಾನುಭೂತಿಯ ಪದವು ಇತರರ ದೃಷ್ಟಿಕೋನವನ್ನು ಅರ್ಥಮಾಡಿಕೊಳ್ಳಲು ಅವಕಾಶವನ್ನು ಒದಗಿಸುತ್ತದೆ. ಬೇರೆ ವ್ಯಕ್ತಿ ಏನು ಅನುಭವಿಸುತ್ತಿದ್ದಾರೆ ಎಂಬುದನ್ನು ಅನುಭವಿಸಲು ಮಕ್ಕಳಿಗೆ ಸಾಧ್ಯವಾಗುತ್ತದೆ. ಸಹಾನುಭೂತಿಯು ಇತರೆ ಜನರೊಂದಿಗೆ ನಿಜವಾದ ಸಂಪರ್ಕ ಸಾಧಿಸಲು ನಮಗೆ ಅವಕಾಶ ಮಾಡಿಕೊಡುತ್ತದೆ.

ಮುಕೇಶ್ ಮಾಳವೀಯ


ಉಲ್ಲೇಖ 1 Social Skills And School | Center for Development and Learning By Candy Lawson

2 The Value of Children's Literature By Martha Crippen

3 Novel Finding: Reading Literary Fiction Improves Empathy

By Julianne Chiaet on October 4, 2013  Scientific amrican

4 The Purpose of Our Emotions    How Our Feelings Help Us Survive and Thrive

By Kendra Cherry